## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 89
2. ಮಾನ್ಯ ಸದಸ್ಯರ ಹೆಸರು : ಶ್ರೀ ತೇಜಸ್ವಿನಿ ಗೌಡ
3. ಉತ್ತರಿಸಬೇಕಾದ ದಿನಾಂಕ : 15.02.2022
4. ಉತ್ತರಿಸುವ ಸಚಿವರು : ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿಹಾಗೂ ಸಕ್ಕರೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಮಂಡ್ಯದಲ್ಲಿರುವ ಐತಿಹಾಸಿಕ ಸರ್ಕಾರಿ ಮೈಶುಗರ್ ಸಕ್ಕರೆ ಕಾರ್ಖಾನೆಯನ್ನು ಆಧುನಿಕ ರೀತಿಯಲ್ಲಿ ಪುನಃಶ್ಚೇತನಗೊಳಿಸಲು ಸರ್ಕಾರ ಕೈಗೊಂಡಿರುವ ಕಾರ್ಯ ಯೋಜನೆಗಳೇನು; | ಮಂಡ್ಯದ ಮೈಸೂರು ಸಕ್ಕರೆ ಕಾರ್ಖಾನೆಯು ದುಡಿಯುವ ಬಂಡವಾಳದ ಕೊರತೆಯಿಂದ 2019-20ನೇ ಹಂಗಾಮಿನಿಂದ ಸ್ಥಗಿತಗೊಂಡಿರುತ್ತದೆ.<br><br>ಮೈಸೂರು ಸಕ್ಕರೆ ಕಾರ್ಖಾನೆಯನ್ನು ಪುನಶ್ಚೇತನಗೊಳಿಸಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>1. ಮೈಸೂರು ಸಕ್ಕರೆ ಕಾರ್ಖಾನೆಯನ್ನು ಎರಡು ವರ್ಷಗಳ ಅವಧಿಗೆ ಪ್ರಾಯೋಗಿಕವಾಗಿ ಸರ್ಕಾರಿ ಸ್ವಾಮ್ಯದಲ್ಲೇ ನಡೆಸಲು ದಿನಾಂಕ:18.10.2021ರಂದು ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯಲ್ಲಿ ತೀರ್ಮಾನಿಸಲಾಗಿದೆ. |
| (ಆ) | ಈ ಕಾರ್ಖಾನೆಯ ಪುನ:ಶ್ಚೇತನ ಪ್ರಯತ್ನಕ್ಕೆ ಯಾವ ರೀತಿಯ ಅಡಚಣೆಗಳು ಎದುರಾಗಿವೆ; ನಿವಾರಣೆಗೆ ಸರ್ಕಾರದ ಪ್ರಯತ್ನವೇನು; | 2. ಮೈಸೂರು ಸಕ್ಕರೆ ಕಾರ್ಖಾನೆಯನ್ನು ಸರ್ಕಾರಿ ಸ್ವಾಮ್ಯದಲ್ಲಿ ನಡೆಸುವ ಸಂಬಂಧ ವರದಿಯನ್ನು ಪಡೆಯಲು ಸರ್ಕಾರದ ಆದೇಶ ಸಂಖ್ಯೆ: ಸಿಐ 334 ಸಿಓಎಫ್ 2021 ದಿನಾಂಕ:03.12.2021ರಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ತಾಂತ್ರಿಕ ಸಲಹಾ ಸಮಿತಿಯನ್ನು ರಚಿಸಿ ಆದೇಶಿಸಲಾಗಿದೆ.<br>3. ಮೈಸೂರು ಸಕ್ಕರೆ ಕಾರ್ಖಾನೆಯನ್ನು ಪುನಶ್ಚೇತನಗೊಳಿಸುವ ಸಂಬಂಧ ಆಡಳಿತ, ಹಣಕಾಸು ಮತ್ತು ತಾಂತ್ರಿಕ ವಿಷಯಗಳಲ್ಲಿ ವರದಿಯನ್ನು ಪಡೆಯಲು ಮತ್ತು Operation and maintain (ಓ ಅಂಡ್ ಎಂ) ಆಧಾರದ ಮೇಲೆ ಕಾರ್ಖಾನೆಯನ್ನು ನಡೆಸುವ ಕುರಿತು ಟೆಂಡರ್ ಡಾಕ್ಯುಮೆಂಟ್ ಅನ್ನು ಸಿದ್ಧಪಡಿಸುವುದಕ್ಕಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮಗಳು 2000ರಡಿಯಲ್ಲಿ 14 ದಿನಗಳ ಅಲ್ಪಾವಧಿ ಟೆಂಡರ್ ಕರೆದು ಕನ್ಸಲ್ಟೆನ್ಸಿ ಸೇವೆಯನ್ನು ಪಡೆಯಲು ಆದೇಶ ಸಂಖ್ಯೆ: ಸಿಐ 326 ಸಿಓಎಫ್ 2021 ದಿನಾಂಕ: 02.12.2021ರಲ್ಲಿ ಸರ್ಕಾರದ ಅನುಮತಿಯನ್ನು ನೀಡಲಾಗಿರುತ್ತದೆ.<br>4. ಅದರಂತೆ, ದಿ ಮೈಸೂರು ಷುಗರ್ ಕಂಪನಿ ಮಂಡ್ಯ ಇವರ ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ: MSCO/AC/CFO/147/2021-22 ದಿನಾಂಕ: 31.12.2021ರಂದು 14 ದಿನಗಳ ಅಲ್ಪಾವಧಿ ಟೆಂಡರ್ ಅನ್ನು ಆಹ್ವಾನಿಸಲಾಗಿತ್ತು. ಆದರೆ ಈ ಟೆಂಡರ್ ಪ್ರಕ್ರಿಯೆಯಲ್ಲಿ ಯಾವುದೇ ಬಿಡ್ಡುಗಳು ಸ್ವೀಕೃತಗೊಂಡಿರುವುದಿಲ್ಲ.<br>ಮರು ಟೆಂಡರ್ ಆಹ್ವಾನಿಸಲು ಸಮಯದ ಅಭಾವವಿರುವುದರಿಂದ ಸಕ್ಕರೆ ಉದ್ದಿಮೆಗಳಿಗೆ ತಾಂತ್ರಿಕ ವರದಿಯನ್ನು ತಯಾರಿಸುವ ಕನ್ಸಲ್ಟೆನ್ಸಿ ಸಂಸ್ಥೆಗಳಿಂದ ಸೇವೆಯನ್ನು ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳ ಪಾರದರ್ಶಕ ಅಧಿನಿಯಮ 1999 ರಡಿಯಲ್ಲಿ 4ಜಿ ವಿನಾಯಿತಿ ನೀಡುವಂತೆ ಮುಖ್ಯ ಹಣಕಾಸು ಅಧಿಕಾರಿ, ದಿ ಮೈಸೂರು ಷುಗರ್ ಕಂಪನಿ ಮಂಡ್ಯ ಇವರು ದಿನಾಂಕ: 03.02.2022ರಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯು ಪ್ರಸ್ತುತ ಆರ್ಥಿಕ ಇಲಾಖೆಯ ಪರಿಶೀಲನೆಯಲ್ಲಿರುತ್ತದೆ. |

| | | |
|---|---|---|
| (ಇ) | ಯಾವ ಕಾಲಮಿತಿಯೊಳಗೆ ಮಂಡ್ಯ ಜಿಲ್ಲೆಯ ಕಬ್ಬು ಬೆಳೆಗಾರರ, ಸಕ್ಕರೆ ಗ್ರಾಹಕರ ನಿರೀಕ್ಷೆಯಂತೆ ಮೈಶುಗರ್ ಸಕ್ಕರೆ ಕಾರ್ಖಾನೆಯನ್ನು ಕಾರ್ಯಾರಂಭ ಮಾಡಲಾಗುವುದು; | 2022-23ನೇ ಹಂಗಾಮಿನಿಂದ ಮೈಸೂರು ಸಕ್ಕರೆ ಕಾರ್ಖಾನೆಯಲ್ಲಿ ಕಬ್ಬು ಅರೆಯುವ ಕಾರ್ಯವನ್ನು ಪ್ರಾರಂಭ ಮಾಡುವ ಕುರಿತು ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. |
| (ಈ) | ಮೈಶುಗರ್ ನಿರ್ವಿಘ್ನವಾಗಿ ಪುನಶ್ಚೇತನಗೊಳ್ಳಲು ಬದ್ಧತೆಯುಳ್ಳ ದಕ್ಷ ಅಧಿಕಾರಿಯನ್ನು ನೇಮಿಸಲು ಪ್ರಕ್ರಿಯೆ ನಡೆದಿದೆಯೇ? | ಪ್ರಸ್ತುತ ಮೈಸೂರು ಸಕ್ಕರೆ ಕಂಪನಿಯನ್ನು ಸರ್ಕಾರಿ ಸ್ವಾಮ್ಯದಲ್ಲಿ ಪುನಃಶ್ಚೇತಗೊಳಿಸಿ, 2022-23ನೇ ಸಾಲಿನ ಹಂಗಾಮಿನಿಂದ ಸದರಿ ಕಾರ್ಖಾನೆಯಲ್ಲಿ ಕಬ್ಬುಅರೆಯುವ ಕಾರ್ಯವನ್ನು ಪ್ರಾರಂಭಿಸುವ ಸಂಬಂಧ ಭಾರತೀಯ ಆಡಳಿತ ಸೇವೆ / ಭಾರತೀಯ ಪೊಲೀಸ್ ಸೇವೆ ಸಲ್ಲಿಸಿರುವ ನಿವೃತ್ತ ಅಧಿಕಾರಿಯನ್ನು ನೇಮಿಸುವ ಕುರಿತು ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗುತ್ತಿದೆ. |

ಸಂಖ್ಯೆ: ಸಿಐ 35 ಸಿಓಎಫ್ 2022

(ಶಂಕರ.ಬ.ಪಾಟೀಲ.ಮುನೇನಕೊಪ್ಪ)
ಕೈಮಗ್ಗ ಮತ್ತು ಜವಳಿ, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ಸಚಿವರು